# ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1434 |
| 2 | ಸದಸ್ಯರ ಹೆಸರು | : | ಡಾ: ವೈ.ಎ. ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ) |
| 3 | ಉತ್ತರಿಸುವ ದಿನಾಂಕ | : | 10-03-2022 |
| 4 | ಉತ್ತರಿಸುವ ಸಚಿವರು | : | ಗೃಹ ಸಚಿವರು |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ಗೃಹ ಇಲಾಖೆಯಲ್ಲಿ ವೃತ್ತ ನಿರೀಕ್ಷಕ/ಸಹಾಯಕ ವೃತ್ತ ನಿರೀಕ್ಷಕರ ವರ್ಗಾವಣೆಗೆ ಅನುಸರಿಸುವ ಮಾನದಂಡಗಳೇನು; ( ಮಾಹಿತಿ ಒದಗಿಸುವುದು) | ಕರ್ನಾಟಕ ಪೊಲೀಸ್ (ತಿದ್ದುಪಡಿ) ಕಾಯ್ದೆ 2013, ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 74 ಶಾಸನ 2012, ದಿನಾಂಕ: 18/06/2013 ರ ಪ್ರಕಾರ ಒಂದು ಸ್ಥಳದಲ್ಲಿ ಒಂದು ವರ್ಷ ಪೂರ್ಣಗೊಂಡ ನಂತರ ವರ್ಗಾವಣೆ ಮಾಡಬಹುದಾಗಿರುತ್ತದೆ.<br><br>ಸರ್ಕಾರದ ಆದೇಶ ಸಂಖ್ಯೆ: ಒಇ 35 ಪಿಇಐ 2020 ದಿನಾಂಕ: 15/05/2020 ಈ ಕೆಳಕಂಡಂತೆ ವಿವರಿಸಿದೆ.<br>1. ಪೊಲೀಸ್ ನಿರೀಕ್ಷಕರ (ಸಿವಿಲ್) ಹುದ್ದೆಗೆ ಮುಂಬಡ್ತಿ ಹೊಂದಿದ ತಕ್ಷಣ ಕಡ್ಡಾಯವಾಗಿ ಕನಿಷ್ಠ 02 ವರ್ಷಗಳ ಸೇವೆಯನ್ನು ಪೊಲೀಸ್ ಇನ್ಸ್‌ಪೆಕ್ಟರ್ ಹುದ್ದೆಯಲ್ಲಿನ ಕಾರ್ಯಕಾರ್ಯೇತರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಬೇಕು.<br>2. ಈ ಆದೇಶ ಜಾರಿಗೊಂಡ ನಂತರದಲ್ಲಿ ಮುಂಬಡ್ತಿ ಹೊಂದುವ ಪೊಲೀಸ್ ಇನ್ಸ್‌ಪೆಕ್ಟರ್ (ಸಿವಿಲ್) ರವರುಗಳಿಗೆ ಈ ನಿಬಂಧನೆ ಜಾರಿಯಾಗುತ್ತದೆ.<br>3. ಪೊಲೀಸ್ ನಿರೀಕ್ಷಕರ (ಸಿವಿಲ್) ರವರುಗಳು ಬೆಂಗಳೂರು ನಗರ/ ಮಂಗಳೂರು ನಗರ/ ಮೈಸೂರು ನಗರ/ ಹುಬ್ಬಳ್ಳಿ-ಧಾರವಾಡ ನಗರ / ಬೆಳಗಾವಿ ನಗರ/ ಕಲಬುರಗಿ ನಗರ ಗಳಂತಹ ಪೊಲೀಸ್ ಕಮಿಷನರೇಟ್ ವ್ಯಾಪ್ತಿಯಲ್ಲಿ ಅನುಕ್ರಮವಾಗಿ ಕನಿಷ್ಠ ಐದು ವರ್ಷಗಳ ಅವಧಿಗೆ ಮಾತ್ರ ಕಾರ್ಯಕಾರಿ ಹುದ್ದೆಗಳಲ್ಲಿ (ಕಾನೂನು ಸುವ್ಯವಸ್ಥೆ, ಸಂಚಾರ ಮತ್ತು "ಸಿಸಿಬಿ") ಸೇವೆ ಸಲ್ಲಿಸಲು ಅವಕಾಶವಿರುತ್ತದೆ.<br>05 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿದ ಅಧಿಕಾರಿಗಳು ಆಯಾ ಪೊಲೀಸ್ ಕಮಿಷನರೇಟ್ ವ್ಯಾಪ್ತಿಯಿಂದ ಕಡ್ಡಾಯವಾಗಿ ಇತರೆ ಘಟಕಗಳಲ್ಲಿನ ಹುದ್ದೆಗಳಲ್ಲಿ 05 ವರ್ಷಗಳ ಅವಧಿಗೆ ಕರ್ತವ್ಯನಿರ್ವಹಿಸತಕ್ಕದ್ದು.<br>ತದನಂತರ ಪೊಲೀಸ್ ಕಮಿಷನರೇಟ್ ಹೊರತುಪಡಿಸಿ ಇತರೆ ಘಟಕಗಳಲ್ಲಿ 05 ವರ್ಷಗಳ ಕಾಲ Cooling period ಅನ್ನು ಪೂರ್ಣಗೊಳಿಸಿದ ನಂತರ ಆಯಾ ಪೊಲೀಸ್ ಕಮೀಷನರೇಟ್ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸಲು ಪುನಃ ಅರ್ಹತೆಯನ್ನು ಹೊಂದಲಿರುತ್ತಾರೆ.<br>ಯಾವುದೇ ಅಧಿಕಾರಿಗಳು ಆಯಾ ಕಮಿಷನರೇಟ್ ವ್ಯಾಪ್ತಿಯಲ್ಲಿ ಕಾರ್ಯಕಾರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸಲು 05 ವರ್ಷಗಳ ಕಾಲಾವಧಿಯ ಅವಕಾಶವನ್ನು ನಿಗಧಿಪಡಿಸಲಾಗಿದ್ದು, ಈ ಅವಧಿ ಪ್ರಾರಂಭಗೊಳ್ಳುವ ಪೂರ್ವದಲ್ಲಿ ಕಮಿಷನರೇಟ್ ವ್ಯಾಪ್ತಿಯನ್ನು ಹೊರತುಪಡಿಸಿ |

| | | |
|---|---|---|
| | | ಇತರೆ ಘಟಕಗಳಲ್ಲಿ ಕರ್ತವ್ಯ ನಿರ್ವಹಿಸಿದ ಅವಧಿಯನ್ನು Cooling period ಗೆ ಲೆಕ್ಕಹಾಕುವಂತಿಲ್ಲ ಅಥವಾ ಪರಿಗಣನೆಗೆ ತೆಗೆದುಕೊಳ್ಳುವಂತಿಲ್ಲ.<br>ಸಿಸಿಬಿಯಲ್ಲಿ ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಪೊಲೀಸ್ ಇನ್ಸ್‌ಪೆಕ್ಟರ್ (ಸಿವಿಲ್) ಅಧಿಕಾರಿಗಳು, ಅವರ ಅವಧಿ ಪೂರ್ಣಗೊಳಿಸಿದ ನಂತರ ಅವರುಗಳಿಗೆ ಈ ನಿಬಂಧನೆ ಅನ್ವಯವಾಗುತ್ತದೆ.<br>4. ಯಾವುದೇ ಅಧಿಕಾರಿಯು ಅವರು ಮುಂಬಡ್ತಿ ಹೊಂದಿದ ನಂತರ ನಾಲ್ಕು ವಾರಗಳ ಪುನರ್ಮನನ ತರಬೇತಿಯನ್ನು ಮುಂಬಡ್ತಿ ಹೊಂದಿದ 02 ವರ್ಷದೊಳಗಾಗಿ ಪಡೆಯತಕ್ಕದ್ದು. ಸದರಿ ತರಬೇತಿಯನ್ನು ಪೂರ್ಣಗೊಳಿಸದ ಅಧಿಕಾರಿಗಳನ್ನು ಕಾರ್ಯಕಾರಿ ಹುದ್ದೆಗೆ ಪರಿಗಣಿಸತಕ್ಕದ್ದಲ್ಲ.<br>5. ಪೊಲೀಸ್ ಇನ್ಸ್‌ಪೆಕ್ಟರ್ ರವರುಗಳ ವಿರುದ್ಧ ಯಾವುದೇ ಪ್ರಮುಖ ಇಲಾಖಾ ವಿಚಾರಣೆ, ಲೋಕಾಯುಕ್ತ ಪ್ರಕರಣ ಅಥವಾ ವಿಚಾರಣೆಯಲ್ಲಿರುವ ಅಪರಾಧ ಪ್ರಕರಣ ಅಥವಾ ಪೊಲಿಸ್ ಸಿಬ್ಬಂದಿ ಮಂಡಳಿಯು ಅವರು ಅನರ್ಹ ಎಂದು ಪರಿಗಣಿಸಿದ್ದಲ್ಲಿ, ಅಂತಹ ಅಧಿಕಾರಿಯನ್ನು ಕಾರ್ಯಕಾರಿ ಹುದ್ದೆಗೆ ನೇಮಿಸುವಂತಿಲ್ಲ.<br><br>ಸಹಾಯಕ ವೃತ್ತ ನಿರೀಕ್ಷಕರ ಹುದ್ದೆಯು ಅಸ್ತಿತ್ವದಲ್ಲಿರುವುದಿಲ್ಲ. |
| ಆ | ಪಿ.ಇ.ಬಿ (Police Establishment Board) ನಿಂಬಂಧಗಳೇನು; | ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 38 ಶಾಸನ 2012, ದಿನಾಂಕ: 09.08.2012ರಲ್ಲಿ ಪಿಇಬಿ ಯ ರಚನೆ ಹಾಗೂ ಪ್ರಕಾರ್ಯಗಳ ಕುರಿತು ವಿವರಿಸಲಾಗಿದೆ. ಸದರಿ ಅಧಿಸೂಚನೆಯನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |
| ಇ | ಈಗಿರುವ ವರ್ಗಾವಣೆಯ ಅರ್ಹತೆಯ ಅವಧಿಯು ಒಂದು ವರ್ಷ ಇರುವುದರಿಂದ ಎರಡು ವರ್ಷಕ್ಕೆ ವಿಸ್ತರಿಸಲು ಸರ್ಕಾರ ಚಿಂತನೆ ನಡೆಸಿದೆಯೇ; | ಇಂತಹ ಯಾವುದೇ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. |
| ಈ | ಅರ್ಹತೆಯ ಅವಧಿಯು ಒಂದು-ವರ್ಷವಿರುವುದರಿಂದ, ಆಡಳಿತ ವ್ಯವಸ್ಥೆಯ ಮೇಲೆ ಆಗಿರುವ ದುಷ್ಪರಿಣಾಮಗಳು ಸರ್ಕಾರದ ಗಮನಕ್ಕೆ ಬಂದಿದೇಯೇ; | ಯಾವುದೇ ದುಷ್ಪರಿಣಾಮ ಉಂಟಾಗಿರುವುದಿಲ್ಲ. |
| ಉ | ಮೇಲ್ಕಂಡ ಅವಧಿಯನ್ನು ಎರಡು-ವರ್ಷ ಅವಧಿಗೆ ವಿಸ್ತರಿಸಿ ಆಡಳಿತ ಯಂತ್ರವನ್ನು ಚುರುಕುಗೊಳಿಸಲು ಸಾಧ್ಯವಿಲ್ಲವೆ; ಇದರ ಬಗ್ಗೆ ಸರ್ಕಾರದ ಅಭಿಪ್ರಾಯವೇನು? (ವಿವರಣೆ ನೀಡುವುದು.) | ಆಡಳಿತ ಯಂತ್ರವನ್ನು ಚುರುಕುಗೊಳಿಸುವ ಉದ್ದೇಶದಿಂದ ಪೊಲೀಸ್ ಅಧಿಕಾರಿಗಳ ವರ್ಗಾವಣೆಯ ಕನಿಷ್ಠಾವಧಿಯನ್ನು 2 ವರ್ಷದಿಂದ 1 ವರ್ಷಕ್ಕೆ ಕಡಿತಗೊಳಿಸಿ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಂವ್ಯಶಾಇ 75 ಶಾಸನ 2012, ದಿನಾಂಕ:18.06.2013ರಲ್ಲಿ ತಿದ್ದುಪಡಿಗೊಳಿಸಲಾಗಿದೆ. |

ಸಂಖ್ಯೆ: ಒಇ 43 ಪಿಇಎಂ 2022

(ಆರಗ ಜ್ಞಾನೇಂದ್ರ)
ಗೃಹ ಸಚಿವರು